

# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 16-03-2021 ಪ್ರಶ್ನೆ ಸಂಖ್ಯೆ : 1155 (1378)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಯು.ಬಿ. ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 16-03-2021

ಉತ್ತರಿಸುವ ಸಚಿವರು: ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು

ವಿಷಯ : ಕಲ್ಲು ಗಣಿಗಾರಿಕೆಯ ಕುರಿತು

(ಅ) ರಾಜ್ಯದ ಯಾವ ಯಾವ ಜಿಲ್ಲೆಗಳಲ್ಲಿ ಕಲ್ಲು ಗಣಿಗಾರಿಕೆಗೆ ಅನುಮತಿಯನ್ನು ನೀಡಲಾಗಿದೆ ; (ವಿವರವನ್ನು ನೀಡುವುದು)

(ಆ) ಅನುಮತಿ ಪಡೆದ ಗಣಿಗಳಲ್ಲಿ ಯಾವ ಪ್ರಮಾಣದಲ್ಲಿ ಜಿಲೆಟಿನ್ ಬಳಸಲು ಅನುಮತಿಯನ್ನು ನೀಡಲಾಗಿದೆ ; (ವಿವರ ನೀಡುವುದು)

(ಇ) ಪ್ರತಿನಿತ್ಯ ಎಷ್ಟು ಪ್ರಮಾಣದ ಜಿಲೆಟಿನ್ ಸರಬರಾಜು ಮಾಡಲು ಅನುಮತಿಯನ್ನು ನೀಡಲಾಗಿದೆ ; ಯಾವ ಸ್ಥಳದಿಂದ ಸರಬರಾಜಾಗುತ್ತಿದೆ ; ಅಕ್ರಮವಾಗಿ ಸರಬರಾಜಾಗುತ್ತಿರುವ ಜಿಲೆಟಿನ್‌ನ ಪ್ರಮಾಣ ಎಷ್ಟು ; ಅಕ್ರಮ ಸರಬರಾಜುದಾರರ ವಿರುದ್ಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು ;

(ಈ) ಇತ್ತೀಚೆಗೆ ಶಿವಮೊಗ್ಗ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಸಂಭವಿಸಿದ ಜಿಲೆಟಿನ್ ಕಡ್ಡಿಗಳ ಸ್ಫೋಟದಲ್ಲಿ ಮೃತಪಟ್ಟವರ ಸಂಖ್ಯೆ ಎಷ್ಟು ; ಸರ್ಕಾರದಿಂದ ಮೃತ ವ್ಯಕ್ತಿಗಳ ಕುಟುಂಬಸ್ಥರಿಗೆ ಪರಿಹಾರವನ್ನು ನೀಡಲಾಗಿದೆಯೇ ; ನೀಡಲಾಗಿದ್ದರೆ, ಎಷ್ಟು ಜನ ಸಂತ್ರಸ್ಥರಿಗೆ ಪರಿಹಾರ ನೀಡಲಾಗಿದೆ ; ಉಳಿಕೆ ಎಷ್ಟು ಜನ ಸಂತ್ರಸ್ಥರಿಗೆ ನೀಡಲಾಗಿದೆ ; ಯಾವಾಗ ನೀಡಲು ಉದ್ದೇಶಿಸಿದೆ ? (ವಿವರವನ್ನು ನೀಡುವುದು)